# ಪ್ರೀತಿಯ ಆಸರೆ ಇದ್ದರೆ ಪರಿಸ್ಥಿತಿಯೇ ಬೇರೆ

ಇದು ಒಬ್ಬ ತರುಣನ ಕಥೆ. ಇದು, ನಿಮಗೆ ಅತ್ಯಂತ ಪ್ರಿಯರಾದ ಯಾವುದೇ ಒಬ್ಬ ವ್ಯಕ್ತಿಯ ದಾರುಣ ಕಥೆಯೂ ಆಗಿರಬಹುದು. ಮಾದಕ ವಸ್ತು ಸೇವಿಸುವುದರ ದುಷ್ಪರಿಣಾಮಗಳನ್ನು ಈ ಕಥೆ ನಿಮಗೆ ತಿಳಿಸುತ್ತದೆ. ಇದನ್ನು ನೀವು ಓದಿ, ಯೋಚಿಸಿ ಮತ್ತು ನಿಮ್ಮ ಇತರ ಗೆಳೆಯರಿಗೂ ತಿಳಿಸಿ.

ಅಮಿತ್‌ನ ತಂದೆ–ತಾಯಿ ತುಂಬ ಅನುಕೂಲಸ್ಥರು.
ಅವರಿಗೆ ಒಬ್ಬನೇ ಮಗ ಅಮಿತ್.





ಆದರೆ ತಂದೆ–ತಾಯಿಯ ವಾತ್ಸಲ್ಯ ಏನೆಂಬುದನ್ನೇ ಅವನು ಅರಿಯ. ಏಕೆಂದರೆ ಅವರು ಸದಾ ಹಣ ಸಂಪಾದನೆಯಲ್ಲೇ ಮಗ್ನರಾಗಿದ್ದರು. ಅವರು ತಮ್ಮ ಸಮಯವನ್ನು ಸದಾ ಪಾರ್ಟಿಗಳಲ್ಲಿ ಮತ್ತು ಕ್ಲಬ್‌ಗಳಲ್ಲಿ ಕಳೆಯುತ್ತಿದ್ದರು. ಮಗನ ಜೊತೆಯಲ್ಲಿ ಕಾಲ ಕಳೆಯಲು ಅವರಿಗೆ ಬಿಡುವೇ ಇರುತ್ತಿರಲಿಲ್ಲ.



ಅಮಿತ್‌ಗೆ ಊಟ–ತಿಂಡಿಗೇನೂ ಕೊರತೆ ಇರಲಿಲ್ಲ. ಆದರೆ, ತಾಯಿಯನ್ನು ನೋಡುವ ಅವಕಾಶ ಮಾತ್ರ ಅವನಿಗೆ ಬಹಳ ಅಪರೂಪವಾಗಿತ್ತು. ಒಂಟಿತನ ಅವನನ್ನು ಕಾಡುತ್ತಿತ್ತು. ಹಣವಿದ್ದರೂ ಸುಖವಿರಲಿಲ್ಲ. ಒಂಟಿತನದಿಂದ ಪಾರಾಗಲು ಅವನು ಯತ್ನಿಸುತ್ತಿದ್ದ.







ಗೆಳೆಯರ ಜೊತೆ ಹೆಚ್ಚು ಸಮಯವನ್ನು ಕಳೆಯಲಾರಂಭಿಸಿದ. ಅಮಿತ್ ಮೊದಲು ಮದ್ಯಪಾನದ ರುಚಿ ಕಂಡುಕೊಂಡ. ಅನಂತರ ಯಾವಾಗಲೂ ಗೆಳೆಯರ ಒಂದು ಪ್ರತ್ಯೇಕ ಗುಂಪಿನ ಸಹವಾಸದಲ್ಲೇ ಇರುತ್ತಿದ್ದ.

ಒಂದು ದಿನ ಒಬ್ಬ ಗೆಳೆಯ ಅವನಿಗೆ ಒಂದು ವಿಶೇಷ ಸಿಗರೆಟ್ ಕೊಟ್ಟ. ಆ ವೇಳೆಗಾಗಲೇ ಸಿಗರೆಟ್ ಸೇದುವ ಅಭ್ಯಾಸ ಬೆಳೆಸಿಕೊಂಡಿದ್ದ ಅಮಿತ್‌ಗೆ, ಈ ಸಿಗರೆಟ್ ನೋಡಿ, ಕುತೂಹಲ ಉಂಟಾಯಿತು. ಇದು ಅಪಾಯದ ಆರಂಭವೆಂಬುದನ್ನು ಅರಿಯದೆ, ಸಿಗರೆಟ್‌ನಿಂದ ಎರಡು ದಮ್ಮು ಎಳೆದ. ಗೆಳೆಯ ಅವನಿಗೆ ಇಂತಹ ಸಿಗರೆಟ್‌ಗಳನ್ನು ಪ್ರತಿದಿನ ಒದಗಿಸುತ್ತಿದ್ದ. ಈ ಸಿಗರೆಟ್‌ಗಳು ಸ್ಮ್ಯಾಕ್ ಅನ್ನು ಒಳಗೊಂಡಿದ್ದವು. ತನ್ನನ್ನು ಕಡೆಗಣಿಸಿದ್ದ ಮನೆಯ ಬಗ್ಗೆ ಬೇಸತ್ತ ಅಮಿತ್‌ಗೆ, ಈಗ ಗೆಳೆಯರ ಜೊತೆಯಲ್ಲಿ ಮಾದಕ ಔಷಧ ಸೇವಿಸುವ ಚಟ ಹೆಚ್ಚಿತು.



ಸಿಗರೆಟ್‌ಗಳ ಬಿಟ್ಟಿ ಸರಬರಾಜು ನಿಂತಿತು. ಅಮಿತ್ ಈಗ ಅವಕ್ಕೆ ಹಣ ತೆರಬೇಕಾಯಿತು. ಅವನ ವ್ಯಕ್ತಿತ್ವ ಸಂಪೂರ್ಣ ಬದಲಾಯಿತು. ಒಮ್ಮೊಮ್ಮೆ ಅವನು ತುಂಬ ದುಃಖಿತನಾಗಿರುತ್ತಿದ್ದ. ಕೆಲವು ವೇಳೆ ವಿಪರೀತ ಹುರುಪಿನಿಂದಿರುತ್ತಿದ್ದ. ಅವನ ತೂಕ ಇಳಿಯಿತು. ಆಹಾರ ಸೇವನೆ ಸಹ ಕಡಿಮೆಯಾಯಿತು. ಪದೇ ಪದೇ ಅವನು ವಾಂತಿ ಮಾಡುತ್ತಿದ್ದ. ಹೊಟ್ಟೆ ಮತ್ತು ಮೈಕೈ ನೋಯಲಾರಂಭಿಸಿತು. ಅವನು ತುಂಬ ಕೊಳಕನಾಗಿ ಕಾಣತೊಡಗಿದ.







ಮನೆಯಲ್ಲಿದ್ದಾಗ ಅವನು ತನ್ನ ಕೋಣೆಯಿಂದ ಹೊರ ಬರುತ್ತಿರಲಿಲ್ಲ. ಒಂದಾದ ಮೇಲೊಂದರಂತೆ ಸಿಗರೆಟ್ ಸೇದುತ್ತಿದ್ದ.

ಅಮಿತ್ ಈಗ ಶಾಲೆಗೆ ಹೋಗುವುದನ್ನು ನಿಲ್ಲಿಸಿದ. ಆಟವಾಡುವುದನ್ನು ಬಿಟ್ಟ. ಕೆಲಸದ ಮೇಲೆ ಅವನಿಗೆ ದ್ವೇಷ ಹುಟ್ಟಿತು. ಅವನು ಕೆಲವು ಗೆಳೆಯರ ಮಧ್ಯೆ ಕುಳಿತು, ಮಾದಕ ಪದಾರ್ಥಗಳ ಸೇವನೆಯಲ್ಲಿ ತಲ್ಲೀನನಾಗಿರುತ್ತಿದ್ದ.





ಆಶ್ಚರ್ಯವೆಂದರೆ -ಈಗ ಅಮಿತ್‌ಗೆ ಹಣದ ಕೊರತೆ ಉಂಟಾಗತೊಡಗಿತು. ಅವನು ಸ್ಮ್ಯಾಕ್‌ನ ಗುಲಾಮನಾಗಿದ್ದ ಅದನ್ನು ಬಿಟ್ಟಿರಲು ಅವನಿಗೆ ಸಾಧ್ಯವಾಗುತ್ತಿರಲಿಲ್ಲ. ಏನೂ ದಾರಿ ಕಾಣದೆ, ಅವನು ಮನೆಯಲ್ಲಿದ್ದ ಬೆಲೆಬಾಳುವ ವಸ್ತುಗಳನ್ನು ಕದ್ದು, ಅದನ್ನು ಮಾರಿ ಬಂದ ಹಣದಿಂದ ಸ್ಮ್ಯಾಕ್ ಕೊಳ್ಳುತ್ತಿದ್ದ. ಆರಂಭದಲ್ಲಿ ಅವನ ಮನಸ್ಸು ಚುಚ್ಚುತ್ತಿತ್ತು. ಆದರೆ ಅನಂತರ, ಅವನ ಮನಸ್ಸು ಇದಕ್ಕೆ ಒಗ್ಗಿಹೋಯಿತು.


ಅಮಿತ್‌ನ ತಂದೆ–ತಾಯಿಗೆ ಏನೂ ಗೊತ್ತಾಗಲಿಲ್ಲ.
ಒಂದು ದಿನ ನಡೆದ ಒಂದು ಘಟನೆ ಅವರ ಕಣ್ಣು ತೆರೆಯಿಸಿತು.
ಡ್ರಾಯಿಂಗ್ ರೂಮ್‌ನಲ್ಲಿದ್ದ ದೊಡ್ಡ ಕಂಚಿನ ಪ್ರತಿಮೆ ಕಣ್ಮರೆಯಾಗಿತ್ತು.

ತಕ್ಷಣ, ಮನೆಯಲ್ಲಿದ್ದ ಒಬ್ಬನೇ ಸೇವಕನ ಮೇಲೆ ಅನುಮಾನ ಉಂಟಾಯಿತು. ಅಮಿತ್‌ನ ತಂದೆ ಸೇವಕನನ್ನು ಚೆನ್ನಾಗಿ ಹೊಡೆದರು. ಅವರು ಪೋಲೀಸರನ್ನು ಸಹ ಕರೆಸಿದರು. ತಾನು ನಿರಪರಾಧಿಯೆಂದು ಸೇವಕ ಎಷ್ಟೇ ಹೇಳಿದರೂ, ಯಾರೂ ಅವನ ಮಾತು ಕೇಳಲಿಲ್ಲ.



ಅಮಿತ್ ಎಲ್ಲವನ್ನೂ ನೋಡುತ್ತಾ ನಿಂತಿದ್ದ. ಅವನು ಭಯದಿಂದ ಬೆವರು ಹೋಗಿದ್ದ. ಮುಖ ಒರೆಸಿಕೊಳ್ಳಲು, ಜೇಬಿನಿಂದ ಕರವಸ್ತ್ರವನ್ನು ಹೊರಗೆಳೆದಾಗ, ಅದರಿಂದ ನೂರು ರೂಪಾಯಿ ನೋಟುಗಳ ಒಂದು ಕಂತೆ ಕೆಳಗೆ ಬಿದ್ದಿತು.

ಅವನ ಬಾಯಿಂದ ಮಾತೇ ಹೊರಡಲಿಲ್ಲ. ಕಂಚಿನ ಪ್ರತಿಮೆ ಎಲ್ಲಿಗೆ ಹೋಯಿತು ಎಂಬುದು ಸ್ಪಷ್ಟವಾಯಿತು. ಮಗನ ಪರಿಸ್ಥಿತಿ ಕಂಡು ತಾಯಿಗೆ ತುಂಬ ದುಃಖವಾಯಿತು. ಆದರೆ ನಿಜಾಂಶ ಬಯಲಾಗಿತ್ತು.



ಪೋಲೀಸರು ಹೊರಟು ಹೋದರು. ಆದರೆ ವಿಷಯ ಅಲ್ಲಿಗೇ ಮುಗಿಯಲಿಲ್ಲ. ತಂದೆ-ತಾಯಿ ಜಗಳವಾಡ ತೊಡಗಿದರು. ಮಗ ಕೆಟ್ಟಿದ್ದಕ್ಕಾಗಿ, ಅವರು ಒಬ್ಬರನ್ನೊಬ್ಬರು ದೂಷಿಸಿದರು.



ಅಮಿತ್ ತುಂಬ ದುಃಖಿತನಾದ. ಅವನಿಗೆ ತುಂಬ ಅವಮಾನವಾಯಿತು. ಇನ್ನೆಂದಿಗೂ ಮಾದಕ ಪದಾರ್ಥವನ್ನು ಸೇವಿಸುವುದಿಲ್ಲವೆಂದು ಅವನು ದೃಢಸಂಕಲ್ಪ ಮಾಡಿದ. ಆದರೆ, ಅದಿಲ್ಲದೇ ಅವನಿಗೆ ತುಂಬ ಕಷ್ಟವಾಗುತ್ತಿತ್ತು. ಸ್ವಲ್ಪ ಸಮಯದ ಬಳಿಕ, ಅವನು ತುಂಬ ನೋವಿನಿಂದ ಬಳಲಿದ. ಏನು ಮಾಡಬೇಕೆಂಬುದು ತೋಚಲಿಲ್ಲ. ಅವನ ಜೇಬು ಸಹ ಬರಿದಾಗಿತ್ತು.



ಮಗನ ಅಸ್ವಸ್ಥತೆಯಿಂದ ತಾಯಿಗೆ ತುಂಬ ಚಿಂತೆಯಾಯಿತು. ತಂದೆ ಎದೆಗುಂದಿದ್ದರು. ಆದರೆ ಇದ್ದಕ್ಕಿದ್ದಂತೆ ಅವರಿಗೆ, ದೂರದರ್ಶನದಲ್ಲಿ ನೋಡಿದ್ದ 'ಅಂಧಿ ಗಲಿಯಾ' ಕಾರ್ಯಕ್ರಮದ ನೆನಪಾಯಿತು. ಅಮಿತ್ ಮಾದಕ ವಸ್ತುಗಳ ಹಿಡಿತಕ್ಕೆ ಸಿಕ್ಕಿಹಾಕಿಕೊಂಡಿದ್ದಾನೆಂಬುದು ಅವರಿಗೆ ಗೊತ್ತಾಯಿತು. ಆ ಕಥೆಯಲ್ಲಿ ಚಿಕ್ಕ ಹುಡುಗನಿಗೆ ಉಂಟಾಗಿದ್ದ ಪರಿಸ್ಥಿತಿಯನ್ನು ಜ್ಞಾಪಿಸಿಕೊಳ್ಳಲು ಅವರು ಪ್ರಯತ್ನಿಸಿದರು. ಆ ಹುಡುಗನಿಗೆ ಹೇಗೆ ಗುಣವಾಯಿತು ಎಂಬುದು ಅವರ ನೆನಪಿಗೆ ಬಂದಿತು. ಆಶಾಕಿರಣ ಮೂಡಿತ್ತು. ಮಗನನ್ನು ಈಗಲೂ ಉಳಿಸಬಹುದೆಂಬ ಆಸೆ ಚಿಗುರೊಡೆಯಿತು.

ಅವರು ಕೂಡಲೇ ಮಗನನ್ನು ಸಲಹಾ ಹಾಗೂ ದುಶ್ಚಟವನ್ನು ಬಿಡಿಸುವ ಸುಧಾರಣಾ ಕೇಂದ್ರಕ್ಕೆ ಕರೆದುಕೊಂಡು ಹೋದರು.



ಅಲ್ಲಿ ಪರಿಣತರು, ಅವನಿಗೆ ಚಿಕಿತ್ಸಾ ವಿಧಾನವನ್ನು ಹಾಗೂ ಈ ದುಶ್ಚಟವನ್ನು ಹೇಗೆ ತಡೆಯಬಹುದು ಎಂಬುದನ್ನು ತಿಳಿಸಿದರು. ಅವರ ಅನೇಕ ಸಂದೇಹಗಳನ್ನು ನಿವಾರಿಸಿದರು. ಅಮಿತ್ ಮೊದಲು ಹೇಗಿದ್ದನೋ ಅದೇ ರೀತಿಯ ಹುಡುಗನಾಗುತ್ತಾನೆಂದು ಅವರು ಭರವಸೆ ಕೊಟ್ಟರು. ತಾಯಿಗೆ ಮಾತ್ರ ನಿಜ ಸ್ಥಿತಿ ಇನ್ನೂ ಗೊತ್ತಾಗಲಿಲ್ಲ. ಅಕ್ಕಪಕ್ಕದವರು ಆಕೆಯ ಮಗನ ಬಗ್ಗೆ ಪಿಸು ಮಾತನಾಡುತ್ತಿದ್ದರು.



ದುಶ್ಚಟ ಬಿಡಿಸುವ ಕೇಂದ್ರದಿಂದ ಅಮಿತ್‌ನ ತಂದೆಯೊಬ್ಬರೇ ಹಿಂದಿರುಗಿದರು. ಅವರು ತಮ್ಮ ಹೆಂಡತಿಗೆ ಇಡೀ ಕಥೆ ತಿಳಿಸಿದರು. ಅಮಿತ್‌ನ ತಾಯಿಗೆ ಭಯವಾಯಿತು. ಹಗರಣವನ್ನು ತಪ್ಪಿಸಲು ಮಗನನ್ನು ಒಂದು ದೂರದ ಸ್ಥಳಕ್ಕೆ ಕಳಿಸಬಹುದೆಂದು ಅವರು ಸೂಚಿಸಿದರು. ಈಗಾಗಲೇ ಬುದ್ಧಿ ಕಲಿತಿದ್ದ ಅವರ ಪತಿ "ಖಂಡಿತ ಬೇಡ" ಎಂದರು.



"ಮಾಡಿದ ತಪ್ಪನ್ನು ಪುನಃ ಮಾಡುವುದು ಬೇಡ. ಅಮಿತ್‌ನ ಪರಿಸ್ಥಿತಿಗೆ ನಾವೇ ಸಂಪೂರ್ಣ ಜವಾಬ್ದಾರರು. ಅಮಿತ್‌ಗೆ ಬೇಕಾಗಿರುವುದು ನಮ್ಮ ಪ್ರೀತಿ ಮತ್ತು ಸಹಾನುಭೂತಿ. ನಾವು ನಮ್ಮ ಕೆಲಸಗಳಲ್ಲೇ ಮಗ್ನರಾಗಿ, ಅವನಿಗೆ ಅಗತ್ಯವಾಗಿದ್ದ ಪ್ರೀತಿಯನ್ನು ಕೊಡದೇ ಹೋದೆವು."

“ಆದರೇನು, ಅವನಿಗೆ ಬೇಕಾಗಿದ್ದುದೆಲ್ಲ ಇದ್ದೇ ಇದ್ದುವಲ್ಲಾ–ಹಣ, ಕಾರು, ಬಂಗಲೆ'' ಎಂದರು ಅಮಿತ್‌ನ ತಾಯಿ.

“ಆದರೆ ಯಾವುದು ತಾನೇ ನಮ್ಮ ಪ್ರೀತಿ–ವಾತ್ಸಲ್ಯಗಳಿಗೆ ಸಾಟಿಯಾಗಬಲ್ಲುದು. ಅಮಿತ್‌ಗೆ ಬೇಕಾಗಿದ್ದುದು ನಮ್ಮ ಹಣವಲ್ಲ. ಅವನಿಗೆ ನಮ್ಮ ಪ್ರೀತಿ, ಆರೈಕೆ ಮತ್ತು ನೆರವು ಅಗತ್ಯವಾಗಿದ್ದವು. ನಾವು ಅವನನ್ನು ಒಂಟಿಯಾಗಿಟ್ಟು ಪಾಪ ಕೂಪಕ್ಕೆ, ನಾವೇ ತಳ್ಳಿದೆವು'' ಎಂದರು ಪತಿ.



ಈಗಲೂ ಕಾಲ ಮಿಂಚಿಲ್ಲ. ಮಾದಕ ವಸ್ತುವಿನ ಚಟ ಗುಣವಾಗದ ರೋಗವಲ್ಲ. ಪುಣತರ ಸಕಾಲಿಕ ನೆರವಿನಿಂದ ಇದನ್ನು ಗುಣಪಡಿಸಬಹುದು. ಇದಕ್ಕೆ ದೈಹಿಕ ಹಾಗೂ ಮಾನಸಿಕ ಚಿಕಿತ್ಸಾ ವಿಧಾನಗಳು ಅಗತ್ಯ.''

ಅಮಿತ್‌ನನ್ನು ಮನೆಗೆ ಕರೆತರಲು ಅವನ ತಂದೆ-ತಾಯಿ ಇಬ್ಬರೂ, ಸಲಹಾ ಹಾಗೂ ದುಶ್ಚಟಗಳನ್ನು ಬಿಡಿಸುವ ಸುಧಾರಣಾ ಕೇಂದ್ರಕ್ಕೆ ಹೊರಟರು. ತಮ್ಮ ಮಗನಿಗೆ ಬೇಕಾಗಿರುವ ಪ್ರೀತಿ-ವಾತ್ಸಲ್ಯ ಮತ್ತು ರಕ್ಷಣೆಯನ್ನು ಸದಾ ನೀಡುವ ಒಂದೇ ನಿರ್ಧಾರವನ್ನು ಅವರು ಕೈಗೊಂಡರು. ಅಡ್ಡಹಾದಿ ಹಿಡಿಯಲು ಮಗನಿಗೆ ಅವಕಾಶ ಕೊಡಬಾರದೆಂದು ಅವರು ನಿರ್ಧರಿಸಿದರು.

ತಮ್ಮಿಂದಾಗಿದ್ದ ತಪ್ಪು ತಂದೆ-ತಾಯಿಯನ್ನು ಕಾಡುತ್ತಲೇ ಇತ್ತು. ಆದರೂ ನವೋದಯ ಹಾಗೂ ನವಜೀವನ ಆರಂಭವಾಗುವುದೆಂಬ ಆಶಾಭಾವನೆ ಅವರನ್ನು ಆವರಿಸಿತ್ತು. ಅಮಿತ್‌ನನ್ನು ಸನ್ಮಾರ್ಗಕ್ಕೆ ತರಲು ಮತ್ತು ಇತರರನ್ನು ಸಹ ಸಾವಿನ ದವಡೆಯಿಂದ ರಕ್ಷಿಸಲು, ಇಬ್ಬರೂ ದೃಢ ಸಂಕಲ್ಪ ಮಾಡಿಕೊಂಡರು.



